

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1123 (1210)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ರಾಜ್ಯದಲ್ಲಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಿಂದ ಪರವಾನಗಿ ಪಡೆದು ಸಕ್ರಮ ಗಣಿಗಾರಿಕೆ ನಡೆಸುತ್ತಿರುವ ಕ್ರಷರ್‌ಗಳ ಸಂಖ್ಯೆ ಎಷ್ಟು

(ಅ) ರಾಜ್ಯದ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಿಂದ ಪರವಾನಗಿ ಪಡೆದು ಸಕ್ರಮ ಗಣಿಗಾರಿಕೆ ನಡೆಸುತ್ತಿರುವ ಕ್ರಷರ್‌ಗಳ ಸಂಖ್ಯೆ ಎಷ್ಟು; ಅಕ್ರಮವಾಗಿ ಕ್ರಷರ್‌ಗಳನ್ನು ನಡೆಸುತ್ತಿರುವ ವಿವರ ನೀಡುವುದು; ಈ ಕ್ರಷರ್‌ಗಳಿಗೆ ಕ್ವಾರೆಗಳಿಂದ ಯಾವ ರೀತಿ ಕಚ್ಚಾ ವಸ್ತುಗಳನ್ನು ಸಾಗಾಣಿಕೆ ಮಾಡಲಾಗುತ್ತಿದೆ; (ವಿವರ ನೀಡುವುದು)

(ಆ) ಗಣಿಗಾರಿಕೆಯನ್ನು ಪರಿಶೀಲನೆ ಮಾಡಲು ಪರವಾನಗೆ ನೀಡಲು ಪ್ರತಿ ಜಿಲ್ಲೆಗೆ ನೇಮಕ ಮಾಡಲಾಗಿರುವ ಸಿಬ್ಬಂದಿಯ ಸಂಖ್ಯೆ ಎಷ್ಟು; ಈ ಸಿಬ್ಬಂದಿಗೆ ಜಿಲ್ಲಾಡಳಿತ ಹಾಗೂ ಪೊಲೀಸ್ ಇಲಾಖೆಯೊಂದಿಗೆ ಕೋ-ಆರ್ಡಿನೇಷನ್ ಮಾಡಲಾಗಿದೆಯೇ;

(ಇ) ಇದುವರೆಗೆ ಎಷ್ಟು ಜನರ ಮೇಲೆ ಪ್ರಕರಣವನ್ನು ದಾಖಲಿಸಲಾಗಿದೆ; ಅದರಲ್ಲಿ ಕಾರ್ಮಿಕರೆಷ್ಟು; ಮಾಲಿಕರೆಷ್ಟು;

(ಈ) ಕಲ್ಲು ಗಣಿಗಾರಿಕೆಯಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರ ಬಗ್ಗೆ ಕಾರ್ಮಿಕ ಇಲಾಖೆಯು ಪರಿಶೀಲಿಸಿದೆಯೇ; ಅವರಿಗೆ ನ್ಯಾಯವಾದ ಸಂಬಳ, ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆ ಬಗ್ಗೆ ಜಿಲ್ಲಾಡಳಿತ ಅಥವಾ ಕಾರ್ಮಿಕ ಇಲಾಖೆ ಕೈಗೊಂಡ ಕ್ರಮಗಳೇನು;

(ಉ) ಕಲ್ಲು ಗಣಿಗಾರಿಕೆಯಲ್ಲಿ ಕೆಲಸ ಮಾಡುವ ಕಾರ್ಮಿಕರ ಮಕ್ಕಳ ವಿದ್ಯಾಭ್ಯಾಸಕ್ಕೆ ಸರ್ಕಾರ ಯಾವ ಕ್ರಮವನ್ನು ಕೈಗೊಂಡಿದೆ; ಕೈಗೊಳ್ಳದೇ ಇದ್ದಲ್ಲಿ, ಕಾರ್ಮಿಕ ಇಲಾಖೆಯ ಅಧಿಕಾರಿಗಳ ಮೇಲೆ ತೆಗೆದುಕೊಂಡ ಕ್ರಮಗಳೇನು?